

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1577
ಸದಸ್ಯರ ಹೆಸರು : ಶ್ರೀ ಅರುಣ ಶಹಾಪುರ
ಉತ್ತರಿಸುವ ದಿನಾಂಕ : 11-03-2022
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡಗಳ, ಹಿಂದುಳಿದ ವರ್ಗಗಳ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ ಸಿಬ್ಬಂದಿಗಳಿಗೆ ಕೆ.ಜಿ.ಐ.ಡಿ, ಇ.ಜಿ.ಐ.ಎಸ್, ಡಿ.ಸಿ.ಆರ್.ಜಿ ಇತ್ಯಾದಿ ಎಲ್ಲಾ ಸರ್ಕಾರಿ ಸೌಲಭ್ಯಗಳನ್ನು ನೀಡದಿರಲು ಕಾರಣವೇನು; | ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವ್ಯಾಪ್ತಿಯಲ್ಲಿ 826 ವಸತಿ ಶಾಲೆ/ಕಾಲೇಜುಗಳು (ಪರಿಶಿಷ್ಟ ಜಾತಿ-503, ಪರಿಶಿಷ್ಟ ವರ್ಗ-156, ಹಿಂದುಳಿದವರ್ಗ-167) ಕಾರ್ಯನಿರ್ವಹಿಸುತ್ತಿವೆ.<br><br>ಸದರಿ ವಸತಿ ಶಾಲೆಗಳಲ್ಲಿ ಒಟ್ಟು 18,988 ಬೋಧಕ/ ಬೋಧಕೇತರ ಹುದ್ದೆಗಳು ಮಂಜೂರಾಗಿದ್ದು, ಈ ಪೈಕಿ 5801 ಖಾಯಂ ಬೋಧಕ/ ಬೋಧಕೇತರ ಸಿಬ್ಬಂದಿಗಳು ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಸದರಿ ಖಾಯಂ ಸಿಬ್ಬಂದಿಗಳಿಗೆ ಸಂಬಂಧಿಸಿದ ಸೇವಾ ಸೌಲಭ್ಯಗಳ ವಿವರ ಈ ಕೆಳಕಂಡಂತಿದೆ. |
| ಆ) | ಈ ಸೌಲಭ್ಯಗಳನ್ನು ನೀಡುವ ಕುರಿತು ಯಾವುದಾದರೂ ಪ್ರಸ್ತಾವನೆ ಇದೆಯೇ; ಹಾಗಿದ್ದಲ್ಲಿ, ಯಾವ ಹಂತದಲ್ಲಿದೆ; ಯಾವ ಯಾವ ಸೌಲಭ್ಯಗಳನ್ನು ಈ ನೌಕರರು ನೀರೀಕ್ಷಿಸಬಹುದು; (ವಿವರಣೆ ನೀಡುವುದು) | |
| ಇ) | ಯಾವ ಕಾಲಮಿತಿಯಲ್ಲಿ ಈ ಸೌಲಭ್ಯಗಳನ್ನು ಈ ನೌಕರರಿಗೆ ನೀಡಲಾಗುವುದು? (ವಿವರಣೆ ನೀಡುವುದು) | **ಡಿ.ಸಿ.ಆರ್.ಜಿ:-** ಸದರಿ ವಸತಿ ಶಾಲೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಖಾಯಂ ಶಿಕ್ಷಕರಿಗೆ ಮರಣ ಉಪದಾನ (DCRG) ಸೌಲಭ್ಯ ವಿಸ್ತರಿಸುವ ಪ್ರಸ್ತಾವನೆಯು ಆರ್ಥಿಕ ಇಲಾಖೆಯ ಪರಿಶೀಲನೆಯಲ್ಲಿರುತ್ತದೆ.<br><br>**ಕೆ.ಜಿ.ಐ.ಡಿ:-** ಕರ್ನಾಟಕ ಸರ್ಕಾರದ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿರುವ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವಸತಿ ಶಾಲೆಗಳ ನೌಕರರು ಖಾಯಂ ರಾಜ್ಯ ಸರ್ಕಾರಿ ನೌಕರರಿಗಾಗಿ ರೂಪಿಸಲಾಗಿರುವ ಕಡ್ಡಾಯ ಜೀವ ವಿಮಾ ನಿಯಮಗಳ ವ್ಯಾಪ್ತಿಗೆ ಒಳಪಡಿಸಲು ಅವಕಾಶವಿರುವುದಿಲ್ಲವೆಂದು ಆರ್ಥಿಕ ಇಲಾಖೆಯು ತಿರಸ್ಕರಿಸಿ ಹಿಂಬರಹ ನೀಡಿರುತ್ತದೆ.<br><br>**ಜ್ಯೋತಿ ಸಂಜೀವಿನಿ:-** ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಖಾಯಂ ನೌಕರರು ಮತ್ತು ಅವರ |

| | | |
|---|---|---|
| | | ಅವಲಂಭಿತರಿಗೆ ಜ್ಯೋತಿ ಸಂಜೀವಿನಿ ಯೋಜನೆಯನ್ನು ಅಳವಡಿಸಲು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಮುಖಾಂತರ ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ನೊಂದಿಗೆ ಸಮಾಲೋಚಿಸಿ ಯೋಜನೆಯನ್ನು ವಿಸ್ತರಿಸುವಂತೆ ಅಭಿಪ್ರಾಯ ನೀಡಿದೆ. ಅದರಂತೆ, ಕಾರ್ಯನಿರ್ವಾಹಕ ನಿರ್ದೇಶಕರು, ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ರವರು ಸಂಘದ ನೌಕರರಿಗೆ ಜ್ಯೋತಿ ಸಂಜೀವಿನಿ ಯೋಜನೆಯನ್ನು ವಿಸ್ತರಿಸಲು ಷರತ್ತುಗಳಿಗೆ ಒಳಪಟ್ಟು ತಾತ್ವಿಕ ಒಪ್ಪಿಗೆ ನೀಡಿರುತ್ತಾರೆ. ಅದರಂತೆ, ಈಗಾಗಲೇ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವಸತಿ ಶಾಲೆ/ ಕಾಲೇಜುಗಳ ಸಿಬ್ಬಂದಿಗಳು ಮತ್ತು ಅವರ ಅವಲಂಬಿತರ ಹೆಸರು, ವಯಸ್ಸು, ಆಧಾರ್, Bio metric finger impression/IRIS, ವಿಳಾಸ ಇತ್ಯಾದಿ ವಿವರಗಳನ್ನು ಸಂಘದ ಹೆಚ್.ಆರ್.ಎಂ.ಎಸ್ ತಂತ್ರಾಂಶದಲ್ಲಿ ನಮೂದಿಸಲು ಪ್ರಾಂಶುಪಾಲರುಗಳಿಗೆ ಸೂಚಿಸಲಾಗಿರುತ್ತದೆ. ಆದರೆ, ಪ್ರಸ್ತುತ ಲಭ್ಯವಿರುವ ಹೆಚ್.ಆರ್.ಎಮ್.ಎಸ್ ತಂತ್ರಾಂಶದಲ್ಲಿ ಮೇಲ್ಕಂಡ ಮಾಹಿತಿಯನ್ನು ನಮೂದಿಸಲು ತಾಂತ್ರಿಕ ತೊಂದರೆಗಳು ಇರುವುದಾಗಿ ವಸತಿ ಶಾಲೆಗಳ ಪ್ರಾಂಶುಪಾಲರು ತಿಳಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ತಾಂತ್ರಿಕ ದೋಷವನ್ನು ಸರಿಪಡಿಸುವಂತೆ ಯೋಜನಾ ನಿರ್ದೇಶಕರು, ಹೆಚ್.ಆರ್.ಎಮ್.ಎಸ್. ಸೆಲ್ ರವರಿಗೆ ಈಗಾಗಲೇ ಪತ್ರ ಬರೆಯಲಾಗಿದೆ. ತಂತ್ರಾಂಶವನ್ನು ಉನ್ನತೀಕರಿಸುವ ಪ್ರಕ್ರಿಯೆಗೆ ಸಮಯಾವಕಾಶದ ಅವಶ್ಯಕತೆ ಇರುವುದಾಗಿ ತಿಳಿಸಿರುತ್ತಾರೆ. ಆದ್ದರಿಂದ ಹೆಚ್.ಆರ್.ಎಮ್.ಎಸ್. ಸೆಲ್ ವತಿಯಿಂದ ತಾಂತ್ರಿಕದೋಷ ಬಗೆಹರಿಯುವವರೆಗೆ ತಾತ್ಕಾಲಿಕವಾಗಿ ದೃಢೀಕೃತ ದಾಖಲೆಗಳ (Manual Documents) ಆಧಾರದ ಮೇಲೆ ಸಂಘದ ಸಿಬ್ಬಂದಿಗಳಿಗೆ ಯೋಜನೆಯನ್ನು ಪ್ರಾರಂಭಿಸಲು ಕಾರ್ಯನಿರ್ವಾಹಕ ನಿರ್ದೇಶಕರು ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ರವರಿಗೆ ಪತ್ರದ ಮೂಲಕ ಕೋರಲಾಗಿರುತ್ತದೆ. ಇದಕ್ಕೆ ಸದರಿಯವರು ಒಪ್ಪಿದಲ್ಲಿ, ಸಂಘದ ಖಾಯಂ ನೌಕರರಿಗೆ ಜ್ಯೋತಿ ಸಂಜೀವಿನಿ ಯೋಜನೆಯನ್ನು ಅನುಷ್ಠಾನಗೊಳಿಸಲು ಮುಂದಿನ ಕ್ರಮವಹಿಸಲಾಗುವುದು. |

| | | |
|---|---|---|
| | | **ಖಾಯಂ ಶಿಕ್ಷಕರಿಗೆ ವಿಶೇಷ ಭತ್ಯೆ:-** ವಸತಿ ಶಾಲೆಗಳ ಖಾಯಂ ಸಿಬ್ಬಂದಿಗಳಿಗೆ ಮೂಲ ವೇತನದ ಶೇ 10% ಶಾಲಾ ಕ್ಯಾಂಪಸ್ ವಿಶೇಷ ಭತ್ಯೆಯನ್ನು ಮಂಜೂರು ಮಾಡುವ ಪ್ರಸ್ತಾವನೆಗೆ ಆರ್ಥಿಕ ಇಲಾಖೆಯ ಟಿಪ್ಪಣಿಯಲ್ಲಿ 6ನೇ ರಾಜ್ಯ ವೇತನ ಆಯೋಗವು ತನ್ನ ವರದಿಯಲ್ಲಿ ಈ ರೀತಿಯ ಭತ್ಯೆಗೆ ಯಾವುದೇ ಶಿಫಾರಸ್ಸು ಮಾಡಿರುವುದಿಲ್ಲವಾದ್ದರಿಂದ ಈ ಕ್ಯಾಂಪಸ್ ವಿಶೇಷ ಭತ್ಯೆ ಕೋರಿಕೆಯನ್ನು ಒಪ್ಪಲು ಸಾಧ್ಯವಿಲ್ಲವೆಂದು ಹಿಂಬರಹ ನೀಡಿರುತ್ತದೆ.<br><br>ಮುಂದುವರೆದು, ಸಂಘದ ವ್ಯಾಪ್ತಿಯ ಖಾಯಂ |
| | | ನೌಕರರುಗಳಿಗೆ ಇತರೆ ಸರ್ಕಾರಿ ನೌಕರರುಗಳಿಗೆ ನೀಡುತ್ತಿರುವಂತೆ ವೈದ್ಯಕೀಯ ವೆಚ್ಚ ಮರುಪಾವತಿ, ಕಾಲಕಾಲಕ್ಕೆ ಸರ್ಕಾರದಿಂದ ನಿಗಧಿಪಡಿಸಿದ ವೇತನ ಶ್ರೇಣಿಯಂತೆ ವೇತನ ಬಡ್ತಿ, ಹಾಗೂ ವೇತನ ಶ್ರೇಣಿ, ಗಳಿಕೆ ರಜೆ ನಗದೀಕರಣ ಸೌಲಭ್ಯ, ಮೃತಪಟ್ಟ ಖಾಯಂ ನೌಕರರ ಕುಟುಂಬದ ಸದಸ್ಯರಿಗೆ ಅನುಕಂಪ ಆಧಾರದ ಮೇಲೆ ನಿಯಮಾನುಸಾರ ನೌಕರಿ ಹಾಗೂ ಇತ್ಯಾದಿ ಸೌಲಭ್ಯಗಳನ್ನು ಕಲ್ಪಿಸಲಾಗುತ್ತಿರುತ್ತದೆ.<br><br>ಆದಾಗ್ಯೂ, ಸಂಘದ ಸಿಬ್ಬಂದಿಗಳಿಗೆ ಇತರೆ ಸರ್ಕಾರಿ ನೌಕರರಿಗೆ ಒದಗಿಸಲಾಗುತ್ತಿರುವ ಸೌಲಭ್ಯಗಳಾದ ಡಿ.ಸಿ.ಆರ್.ಜಿ, ಕೆ.ಜಿ.ಐ.ಡಿ. ಶೇ.10 ರಷ್ಟು ವಿಶೇಷ ಭತ್ಯೆ, ಹಾಗೂ ಶೇ.14ರಷ್ಟು ಎನ್.ಪಿ.ಎಸ್ ಎಂಪ್ಲಾಯರ್ ವಂತಿಗೆಯನ್ನು ಪಾವತಿಸಲು ಹೆಚ್ಚುವರಿ ಮಾಹಿತಿಯೊಂದಿಗೆ ಆರ್ಥಿಕ ಇಲಾಖೆಗೆ ಮರು ಪ್ರಸ್ತಾವನೆಯನ್ನು ಸಲ್ಲಿಸಲು ಕ್ರಮವಹಿಸಲಾಗುತ್ತಿದೆ. |

ಸಂಖ್ಯೆ: ಸಕಇ 148 ಮೊದೇಶಾ 2022

(ಕೋಟ ಶ್ರೀನಿವಾಸ ಪೂಜಾರಿ)
ಸಮಾಜ ಕಲ್ಯಾಣ ಮತ್ತು
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.